# ಕರ್ನಾಟಕ ವಿಧಾನಸಭೆ

ಹದಿನಾಲ್ಕನೇ ವಿಧಾನಸಭೆ
ಒಂಬತ್ತನೇ ಅಧಿವೇಶನ
(ಮುಂದುವರೆದ ಉಪವೇಶನಗಳು)

## ಕಾರ್ಯಕಲಾಪಗಳ ಪಟ್ಟಿ

ಸೋಮವಾರ, ದಿನಾಂಕ 28ನೇ ಮಾರ್ಚ್, 2016
(ಸಮಯ: ಬೆಳಗ್ಗೆ 11.00 ಗಂಟೆ)

-----

### 1. ವಿತ್ತೀಯ ಕಾರ್ಯಕಲಾಪಗಳು

"2016-17ನೇ ಸಾಲಿನ ಆಯವ್ಯಯ ಅಂದಾಜುಗಳ ಮೇಲೆ ಮುಂದುವರೆದ ಸಾಮಾನ್ಯ ಚರ್ಚೆ".

### 2. ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯದ ಬಗ್ಗೆ ಅಲ್ಪ ಕಾಲಾವಧಿ ಚರ್ಚೆ

1. **ಶ್ರೀಯುತರುಗಳಾದ ಎನ್.ಹೆಚ್. ಕೋನರಡ್ಡಿ, ಪಿ. ರಾಜೀವ್ ಮತ್ತು ಅರವಿಂದ ಸಿ. ಪಾಟೀಲ್ ಇವರುಗಳು** – ಮಹದಾಯಿ ನದಿಯ ಕಳಸಾ-ಬಂಡೂರಿ ನಾಲಾ ಜೋಡಣೆಯಿಂದ ಮಲಪ್ರಭಾ ನದಿಯ ಕೊಳ್ಳಕ್ಕೆ ನೀರು ಹರಿಸುವಂತೆ 250ಕ್ಕೂ ಹೆಚ್ಚು ದಿನಗಳಿಂದ ನಡೆಯುತ್ತಿರುವ ರೈತ ಚಳುವಳಿಯ ಬಗ್ಗೆ ನೀಡಿರುವ ಸೂಚನೆಯ ಮೇಲೆ ಚರ್ಚೆ.

2. **ಶ್ರೀಯುತರುಗಳಾದ ಜಗದೀಶ್ ಶೆಟ್ಟರ್, ಗೋವಿಂದ ಎಂ.ಕಾರಜೋಳ, ಕೆ.ಜಿ.ಬೋಪಯ್ಯ, ಸಿ.ಟಿ.ರವಿ, ಆರ್.ಅಶೋಕ್ ಹಾಗೂ ಇತರರು** – ಮೈಸೂರಿನ ಉದಯಗಿರಿಯ ಕ್ಯಾತಮಾರನಹಳ್ಳಿಯಲ್ಲಿ ವಾಸವಾಗಿದ್ದ ಸಾಮಾಜಿಕ ಕಾರ್ಯಕರ್ತ ರಾಜು ಎಂಬುವವರನ್ನು ಅಮಾನುಷವಾಗಿ ಕೊಲೆ ಮಾಡಲಾಗಿದ್ದು, ಮೃತ ರಾಜು ಕುಟುಂಬಕ್ಕೆ 25 ಲಕ್ಷ ರೂಪಾಯಿಗಳ ಪರಿಹಾರವನ್ನು ನೀಡುವುದರ ಜೊತೆಗೆ ಕೊಲೆ ಪ್ರಕರಣವನ್ನು ನ್ಯಾಯಾಂಗ ತನಿಖೆಗೆ ಒಪ್ಪಿಸಿ, ಕೂಡಲೇ ಕೊಲೆಗಡುಕರನ್ನು ಬಂಧಿಸಲು ಕ್ರಮ ಕೈಗೊಳ್ಳುವ ಬಗ್ಗೆ ನೀಡಿರುವ ಸೂಚನೆಯ ಮೇಲೆ ಚರ್ಚೆ.

......2

3. **ಶ್ರೀಯುತರುಗಳಾದ ಜಗದೀಶ್ ಶೆಟ್ಟರ್, ಆರ್. ಅಶೋಕ್, ಡಾ|| ಸಿ.ಎನ್. ಅಶ್ವತ್ಥನಾರಾಯಣ, ಎಸ್.ಆರ್.ವಿಶ್ವನಾಥ್, ಎಸ್.ಮುನಿರಾಜು ಹಾಗೂ ಇತರರು** – ಭೂಸ್ವಾಧೀನವಿಲ್ಲದೆ ಸರ್.ಎಂ.ವಿಶ್ವೇಶ್ವರಯ್ಯ, ಜ್ಞಾನಭಾರತಿ, ಬನಶಂಕರಿ 6ನೇ ಹಂತ ಹಾಗೂ ನಾಡಪ್ರಭು ಕೆಂಪೇಗೌಡ ಬಡಾವಣೆಗಳಿಗೆ ಮೂಲಭೂತ ಸೌಲಭ್ಯಕ್ಕಾಗಿ ಉಪಯೋಗಿಸಿಕೊಂಡ ಜಮೀನುಗಳಿಗೆ ಬದಲಾಗಿ ಕಾನೂನು ಬಾಹಿರವಾಗಿ ಅಭಿವೃದ್ಧಿಪಡಿಸಿದ ನಿವೇಶನಗಳನ್ನು ಬಿಡಿಎ ನಿಯಾಮಾವಳಿಗಳನ್ನು ಗಾಳಿಗೆ ತೂರಿ ಹಂಚಿಕೆ ಮಾಡುತ್ತಿರುವುದು ಹಾಗೂ ಭೂಸ್ವಾಧೀನ ಪಡಿಸಿಕೊಂಡ ಪ್ರಕರಣಗಳಲ್ಲಿ ಪರಿಹಾರ ನೀಡುವ ವಿಷಯದಲ್ಲಿ ಬಿಡಿಎ ಅಧಿಕಾರಿಗಳು ಮಧ್ಯವರ್ತಿಗಳ ಜೊತೆ ಶಾಮೀಲಾಗಿ ಸಾವಿರಾರು ಕೋಟಿ ನಷ್ಟವುಂಟುಮಾಡಿರುವ ಬಗ್ಗೆ ನೀಡಿರುವ ಸೂಚನೆಯ ಮೇಲೆ ಚರ್ಚೆ.

4. **ಶ್ರೀಯುತರುಗಳಾದ ಜಗದೀಶ್ ಶೆಟ್ಟರ್, ಎಸ್.ಸುರೇಶ್ ಕುಮಾರ್, ಸಿ.ಟಿ.ರವಿ, ಡಿ.ಎನ್.ಜೀವರಾಜ್, ಲಕ್ಷ್ಮಣ್ ಸಂಗಪ್ಪ ಸವದಿ ಹಾಗೂ ಇತರರು** – ಶಿವಮೊಗ್ಗ ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್ ನಗರ ಶಾಖೆಯಲ್ಲಿ ನಡೆದ ನಗದು ಹಣದ ವ್ಯತ್ಯಾಸ / ಅಧಿಕಾರ ದುರುಪಯೋಗ ಮಾಡಿರುವವರ ಮೇಲೆ ಕಾನೂನು ಕ್ರಮ ಅನುಸರಿಸಲು ಆಗಿರುವ ವಿಳಂಬ ಹಾಗೂ ಸದರಿ ಪ್ರಕರಣವನ್ನು ಸಿ.ಬಿ.ಐ ಗೆ ವಹಿಸುವುದಲ್ಲದೆ ಸಹಕಾರಿ ಕಾಯ್ದೆ ಅನ್ವಯ ಬ್ಯಾಂಕಿನ ಆಡಳಿತ ಮಂಡಳಿಯನ್ನು ತೆಗೆದುಹಾಕಿ ಆಡಳಿತಾಧಿಕಾರಿಯನ್ನು ನೇಮಕ ಮಾಡುವಲ್ಲಿ ಸರ್ಕಾರ ವಿಫಲವಾಗಿರುವ ಬಗ್ಗೆ ನೀಡಿರುವ ಸೂಚನೆಯ ಮೇಲೆ ಚರ್ಚೆ.

5. **ಶ್ರೀಯುತರುಗಳಾದ ಸಿ.ಟಿ. ರವಿ, ಬಿ.ಎನ್. ವಿಜಯ್ ಕುಮಾರ್ ಮತ್ತು ಅನಂತ ವಿಶ್ವೇಶ್ವರ ಹೆಗಡೆ ಕಾಗೇರಿ ಇವರುಗಳು** – ರಾಜ್ಯದ ಹಲವಾರು ವಿಶ್ವವಿದ್ಯಾಲಯಗಳಲ್ಲಿ ಯು.ಜಿ.ಸಿ. ನಿಯಮಗಳ ಉಲ್ಲಂಘನೆ, ವಿವಿಧ ರೀತಿಯ ವ್ಯಾಪಕ ಭ್ರಷ್ಟಾಚಾರ ಪ್ರಕರಣಗಳು, ಅಕ್ರಮಗಳು ಬೆಳಕಿಗೆ ಬಂದಿರುವುದರಿಂದ ಶೈಕ್ಷಣಿಕ ವಾತಾವರಣ ಹದಗೆಟ್ಟಿದ್ದು, ಸಾರ್ವಜನಿಕರು, ವಿದ್ಯಾರ್ಥಿಗಳು ಮತ್ತು ಶಿಕ್ಷಣ ಪರಿಣಿತರು ಆತಂಕಕ್ಕೊಳಗಾಗಿರುವುದರಿಂದ ಸೂಕ್ತ ತಿದ್ದುಪಡಿಯ ಅಗತ್ಯವಿರುವುದರ ಬಗ್ಗೆ ನೀಡಿರುವ ಸೂಚನೆಯ ಮೇಲೆ ಚರ್ಚೆ.

## 3. ಪ್ರಶ್ನೋತ್ತರ

**ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು** : **ಒಂಬತ್ತನೇ ಪಟ್ಟಿ**

**ಆ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು** : **ಒಂಬತ್ತನೇ ಪಟ್ಟಿ**

## 4. ಸಭೆಯ ಮುಂದಿಡಲಾಗುವ ಕಾಗದ ಪತ್ರಗಳು

ಕರ್ನಾಟಕ ವಿಧಾನ ಪರಿಷತ್ತಿನಿಂದ ತಿದ್ದುಪಡಿಗಳೊಂದಿಗೆ ಅಂಗೀಕಾರವಾದ ರೂಪದಲ್ಲಿರುವ 2016ನೇ ಸಾಲಿನ ಶ್ರೀ ಮಲೈ ಮಹದೇಶ್ವರಸ್ವಾಮಿ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ (ತಿದ್ದುಪಡಿ) ವಿಧೇಯಕವನ್ನು ಕಾರ್ಯದರ್ಶಿಯವರು ಸಭೆಯ ಮುಂದೆ ಮಂಡಿಸುವುದು.

## 5.ಅರ್ಜಿಗಳನ್ನು ಒಪ್ಪಿಸುವುದು

**ಶ್ರೀ ಎನ್.ಹೆಚ್.ಶಿವಶಂಕರರೆಡ್ಡಿ** (ಮಾನ್ಯ ಉಪ ಸಭಾಧ್ಯಕ್ಷರು ಹಾಗೂ ಅಧ್ಯಕ್ಷರು, ಅರ್ಜಿಗಳ ಸಮಿತಿ) ಅವರು ಈ ಕೆಳಕಂಡ ಅರ್ಜಿಗಳನ್ನು ಒಪ್ಪಿಸುವುದು.

1. ದೇವನಹಳ್ಳಿ ತಾಲ್ಲೂಕಿನ ತಹಶೀಲ್ದಾರ್ ರವರು ಹಳೆಯ ದಾಖಲೆಗಳನ್ನು ತಿದ್ದಿ ಸರ್ಕಾರಿ ಜಾಗದಲ್ಲಿ ಬೇನಾಮಿಯಾಗಿ ಖಾತೆ ಮಾಡುತ್ತಿರುವ ಬಗ್ಗೆ;
2. ಜೆ.ಪಿ.ನಗರ 4ನೇ ಹಂತದ, 4ನೇ ಮುಖ್ಯ ರಸ್ತೆಯನ್ನು ಏಕ ಮುಖ ಸಂಚಾರ ಅಥವಾ ಬ್ಯಾರಿಕೇಡ್ ನಿರ್ಮಾಣ ಮಾಡುವ ಬಗ್ಗೆ ;
3. ಉತ್ತರಹಳ್ಳಿ ಇಸ್ರೋ ಲೇಔಟ್ ಬಳಿ ಇರುವ ಕಾವೇರಿ ಪೈಪ್ ಲೈನ್ ರಸ್ತೆಗೆ ಡಾಂಬರೀಕರಣ ಮಾಡುವ ಬಗ್ಗೆ ;
4. ಕಲಬುರಗಿ ಜಿಲ್ಲೆಯ ಆಳಂದ ಪುರಸಭೆ ವ್ಯಾಪ್ತಿಯಲ್ಲಿ 535 ಆಶ್ರಯ ಫಲಾನುಭವಿಗಳ ಬೋಗಸ್ ಆಯ್ಕೆ ಪಟ್ಟಿ ಸಿದ್ಧಪಡಿಸಿದವರ ವಿರುದ್ಧ ಕ್ರಮಕೈಗೊಳ್ಳುವ ಬಗ್ಗೆ.

## 6.ವರದಿಯನ್ನೊಪ್ಪಿಸುವುದು

**ಶ್ರೀ ಜೆ.ಆರ್.ಲೋಬೋ** (ಅಧ್ಯಕ್ಷರು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಸಮಿತಿ) ಅವರು – 2015-16ನೇ ಸಾಲಿನ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಸಮಿತಿಯ ನಾಲ್ಕನೇ ವರದಿಯನ್ನು ಒಪ್ಪಿಸುವುದು.

......4

## 7. ಶಾಸನ ರಚನೆ

### ವಿಧೇಯಕವನ್ನು ಮಂಡಿಸುವುದು

**ಕರ್ನಾಟಕ ರಾಜ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ವಿಶ್ವವಿದ್ಯಾಲಯ ವಿಧೇಯಕ, 2016.**

**ಶ್ರೀ ಹೆಚ್.ಕೆ.ಪಾಟೀಲ್ (ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವರು) ಅವರು:-**

ಅ) 2016ನೇ ಸಾಲಿನ ಕರ್ನಾಟಕ ರಾಜ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ವಿಶ್ವವಿದ್ಯಾಲಯ ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು;
ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

## 8. ಗಮನ ಸೆಳೆಯುವ ಸೂಚನೆಗಳು

1. **ಶ್ರೀ ಕೆ.ಎಂ. ಶಿವಲಿಂಗೇಗೌಡ** ಅವರು – ಹಾಸನ ಜಿಲ್ಲೆಯ ರೈತರ ಪ್ರಮುಖ ಬೆಳೆಯಾದ ಆಲೂಗಡ್ಡೆಯ ಬೀಜವನ್ನು ವರ್ತಕರೊಂದಿಗೆ ಶಾಮೀಲಾಗಿ ಹೆಚ್ಚಿನ ಬೆಲೆಗೆ ರೈತರಿಗೆ ಮಾರಾಟ ಮಾಡಿ ಲಕ್ಷಾಂತರ ಹಣ ಪಡೆದಿರುವ ಅಧಿಕಾರಿಗಳ ವಿರುದ್ಧ ಕಠಿಣ ಕ್ರಮ ಜರುಗಿಸಬೇಕೆಂದು ಹಾಗೂ ಆಲೂಗಡ್ಡೆ ಬೆಳೆ ನಾಶವಾಗಿರುವುದರಿಂದ ರೈತರಿಗೆ ಪರಿಹಾರ ನೀಡುವ ಬಗ್ಗೆ ಮಾನ್ಯ ತೋಟಗಾರಿಕಾ ಮತ್ತು ಕೃಷಿ ಮಾರುಕಟ್ಟೆ ಸಚಿವರ ಗಮನ ಸೆಳೆಯುವುದು.

2. **ಶ್ರೀ ಹೆಚ್.ಕೆ. ಕುಮಾರಸ್ವಾಮಿ** ಅವರು – ಅಂಬೇಡ್ಕರ್ ಅಭಿವೃದ್ಧಿ ನಿಗಮದಲ್ಲಿ ಪರಿಶಿಷ್ಟ ಜಾತಿ ಫಲಾನುಭವಿಗಳಿಗೆ ನೇರಸಾಲ ಮತ್ತು ಇತರೆ ಸಾಲ ನೀಡಿಕೆ ಪ್ರಮಾಣ ಕಡಿಮೆ ಆಗಿದ್ದು, ವಿಶೇಷ ಘಟಕ ಯೋಜನೆ ಅನುದಾನವನ್ನು ಬಳಸಿ ಫಲಾನುಭವಿಗಳಿಗೆ ಅನುಕೂಲ ಮಾಡಿಕೊಡುವ ಬಗ್ಗೆ ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರ ಗಮನ ಸೆಳೆಯುವುದು.

3. **ಶ್ರೀ ಬಿ.ಆರ್. ಪಾಟೀಲ್** ಅವರು – ಕೋತನ ಹಿಪ್ಪರಗಾ ಮತ್ತು ನಿಂಬರ್ಗಾ ಕೆರೆ ಕಾಮಗಾರಿಗಳಿಗೆ ಕೇಂದ್ರ ಸರ್ಕಾರ ಪುರಸ್ಕೃತ AIBP ಅಡಿಯಲ್ಲಿ ಮಂಜೂರಾಗಿದ್ದರೂ ಸಹ ರಾಜ್ಯ ಸರ್ಕಾರ ಸದರಿ ಕಾಮಗಾರಿಗಳನ್ನು ಪ್ರಾರಂಭ ಮಾಡಬಾರದೆಂದು ಸೂಚಿಸಿರುವುದರಿಂದ ಜನರಲ್ಲಿ ಅತಂಕ ಮೂಡಿರುವ ಬಗ್ಗೆ ಮಾನ್ಯ ಭಾರೀ ಮತ್ತು ಮಧ್ಯಮ ನೀರಾವರಿ ಸಚಿವರ ಗಮನ ಸೆಳೆಯುವುದು.

......5

4. **ಶ್ರೀ ಬಿ.ಬಿ. ನಿಂಗಯ್ಯ** ಅವರು – ಮೂಡಿಗೆರೆ ತಾಲ್ಲೂಕು, ಬಣಕಲ್ ಹೋಬಳಿ ಫಲ್ಗುಣಿ ಗ್ರಾಮ ಪಂಚಾಯ್ತಿ ವ್ಯಾಪ್ತಿಯ ಬಂಕೇನಹಳ್ಳಿ ಗ್ರಾಮಕ್ಕೆ ಸಂಪರ್ಕಿಸುವ ಜಿಲ್ಲಾ ಪಂಚಾಯತ್ ರಸ್ತೆಗೆ, ಹೇಮಾವತಿ ನದಿಗೆ ಅಡ್ಡಲಾಗಿ ನಿರ್ಮಿಸಿದ್ದ ಸೇತುವೆಯು ಕಳೆದ ವರ್ಷ ಸುರಿದ ಭಾರಿ ಮಳೆಯಿಂದ ಕುಸಿದು ಹೋಗಿದ್ದು, ಕೂಡಲೇ ದುರಸ್ಥಿ ಕಾರ್ಯವನ್ನು ಪ್ರಾರಂಭಿಸಿ ಅಭಿವೃದ್ಧಿ ಪಡಿಸುವ ಬಗ್ಗೆ ಮಾನ್ಯ ಲೋಕೋಪಯೋಗಿ ಸಚಿವರ ಗಮನ ಸೆಳೆಯುವುದು.

5. **ಶ್ರೀ ಎಂ.ಟಿ.ಕೃಷ್ಣಪ್ಪ** ಅವರು – ಚಿಕ್ಕನಾಯಕನಹಳ್ಳಿ ತಾಲ್ಲೂಕು, ಹುಳಿಯಾರು ಹೋಬಳಿ, ಅಂಬಾಪುರ ಗ್ರಾಮದ ಸರ್ವೆ ನಂಬರ್ 46 ರಲ್ಲಿನ ಮೀಸಲು ಅರಣ್ಯ ಪ್ರದೇಶವು ಒತ್ತುವರಿಯಾಗಿದ್ದು, ಕಂದಾಯ ಅಧಿಕಾರಿಗಳು ಯಾವುದೇ ಕ್ರಮ ಕೈಗೊಳ್ಳದಿರುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

6. **ಶ್ರೀ ಹೆಚ್.ಡಿ. ರೇವಣ್ಣ** ಅವರು – ಹಾಸನ ಜಿಲ್ಲೆಯಲ್ಲಿ ಮರಳು ಬೆಲೆ ದುಬಾರಿಯಾಗಿದ್ದು, ಬಡವರು, ಸಾಮಾನ್ಯ ಜನತೆ ಹಾಗೂ ಸರ್ಕಾರದ ಕಾಮಗಾರಿಗಳಿಗೂ ಸಹ ತುಂಬಾ ತೊಂದರೆಯಾಗುತ್ತಿರುವುದರಿಂದ ಈ ಮರಳು ಮಾಫಿಯಾಗಳಿಗೆ ಕಡಿವಾಣ ಹಾಕಲು ಸರ್ಕಾರವು ಕೈಗೊಂಡಿರುವ ಕ್ರಮದ ಬಗ್ಗೆ ಹಾಗೂ ಈ ಮೇಲ್ಕಂಡ ಅಕ್ರಮಗಳ ಬಗ್ಗೆ ಸಮಗ್ರ ತನಿಖೆ ನಡೆಸಲು ಸಿ.ಓ.ಡಿ ಅಥವಾ ಸಿ.ಬಿ.ಐ.ಗೆ ವಹಿಸುವ ವಿಷಯದ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

7. **ಶ್ರೀ ಕೆ.ಎಂ.ತಿಮ್ಮರಾಯಪ್ಪ** ಅವರು – ಪಾವಗಡದಲ್ಲಿ ಕೆ.ಎಸ್.ಎಸ್.ಐ.ಡಿ.ಸಿ ಯಿಂದ ಅಭಿವೃದ್ಧಿಪಡಿಸಿರುವ ಕೈಗಾರಿಕಾ ನಿವೇಶನಗಳು ಕಳಪೆ ಮಟ್ಟದಿಂದ ನಿರ್ಮಾಣಗೊಂಡಿರುವುದಕ್ಕೆ ಕಾರಣವಾಗಿರುವ ಗುತ್ತಿಗೆದಾರರ ಹಾಗೂ ಶಾಮೀಲಾಗಿರುವ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಸಣ್ಣ ಕೈಗಾರಿಕೆ ಸಚಿವರ ಗಮನ ಸೆಳೆಯುವುದು.

8. **ಶ್ರೀ ಬಸವರಾಜ ಶಿ. ಶಿವಣ್ಣನವರ್** ಅವರು – ಹಾವೇರಿ ತಾಲ್ಲೂಕಿನ ದೇವಗಿರಿ ಗ್ರಾಮದಲ್ಲಿ ಹುಚ್ಚು ನಾಯಿ ಕಡಿತದಿಂದ ಮೃತಪಟ್ಟವರ ಕುಟುಂಬಗಳಿಗೆ ಹಾಗೂ ಚಿಕಿತ್ಸೆ ಪಡೆದಿರುವ 12 ಕುಟುಂಬದವರಿಗೆ ಯೋಗ್ಯ ಪರಿಹಾರ ನೀಡುವ ಬಗ್ಗೆ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ಗಮನ ಸೆಳೆಯುವುದು.

9. **ಶ್ರೀ ಸಾ.ರಾ. ಮಹೇಶ್** ಅವರು – ದಿನಾಂಕ: 31.03.2016ಕ್ಕೆ ಕೊನೆಗೊಳ್ಳುತ್ತಿರುವ ಮೈಸೂರು ರೇಸ್‌ಕೋರ್ಸ್‌ನ ಗುತ್ತಿಗೆ ಅವಧಿಯ ಪರವಾನಿಗೆಯನ್ನು ನವೀಕರಿಸದೇ ರದ್ದುಪಡಿಸುವ ಬಗ್ಗೆ ಮಾನ್ಯ ಲೋಕೋಪಯೋಗಿ ಸಚಿವರ ಗಮನ ಸೆಳೆಯುವುದು.

10. **ಶ್ರೀ ಪಿ. ರಾಜೀವ್** ಅವರು – ಆರೋಗ್ಯ ಕವಚ 108 ರಡಿ ಜಿ.ವಿ.ಕೆ ಕಂಪನಿಯಿಂದ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳ ಮೇಲಿನ ಶೋಷಣೆ ಕುರಿತು ಮಾಹಿತಿಗಳನ್ನು ಒದಗಿಸುವ ಬಗ್ಗೆ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ಗಮನ ಸೆಳೆಯುವುದು.

.....6

11. **ಶ್ರೀ ಸಿ.ಟಿ. ರವಿ** ಅವರು – ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವತಿಯಿಂದ ಮೊರಾರ್ಜಿ ವಸತಿ ಶಾಲೆಯ ಶಿಕ್ಷಕರುಗಳ ನೇಮಕ / ಪ್ರಕ್ರಿಯೆಗೆ ಸಂಬಂಧಿಸಿದಂತೆ ಅಗತ್ಯ ಪ್ರಮಾಣ ಪತ್ರಗಳನ್ನು ಒದಗಿಸಿದ್ದರೂ ಸಹ ನೇಮಕಾತಿ ಆದೇಶ ನೀಡದಿರುವುದು, ರಾಷ್ಟ್ರೀಯ ನಾಯಕರ ದಿನೋತ್ಸವಗಳಲ್ಲಿ ಹಾಜರಾತಿಗೆ ಸಹಿ ಮಾಡಿರುವ ಕಾರಣದಿಂದಾಗಿ 409 ಪ್ರಾಂಶುಪಾಲ ಶಿಕ್ಷಕ ಅಂತಿಮ ಆಯ್ಕೆ ಪಟ್ಟಿಯಿಂದ 28 ಜನ ಶಿಕ್ಷಕರನ್ನು ಕೈಬಿಟ್ಟಿರುವ ವಿಚಾರದ ಬಗ್ಗೆ ಮಾನ್ಯ ಸಮಾಜ ಕಲ್ಯಾಣ ಸಚಿವರ ಗಮನ ಸೆಳೆಯುವುದು.

12. **ಶ್ರೀ ನಾರಾಯಣಗೌಡ** ಅವರು – ಕೆ.ಆರ್. ಪೇಟೆ ತಾಲ್ಲೂಕಿನ ಆರೋಗ್ಯ ಇಲಾಖೆಯ ತಾಲ್ಲೂಕು ಸಾರ್ವಜನಿಕ ಆಸ್ಪತ್ರೆ, ಸಹಾಯಕ ಆರೋಗ್ಯ ಕೇಂದ್ರ ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ಗಮನ ಸೆಳೆಯುವುದು.

13. **ಶ್ರೀ ಸಿ.ಎನ್. ಬಾಲಕೃಷ್ಣ** ಅವರು - ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಲು ಅನುದಾನ ಬಿಡುಗಡೆ ಮಾಡಿ, ಕಾಮಗಾರಿಯನ್ನು ಪ್ರಾರಂಭಿಸುವ ಬಗ್ಗೆ ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಉನ್ನತ ಶಿಕ್ಷಣ ಸಚಿವರ ಗಮನ ಸೆಳೆಯುವುದು.

14. **ಶ್ರೀ ಜೆ.ಆರ್. ಲೋಬೋ** ಅವರು – ಮಂಗಳೂರು ನಗರದಲ್ಲಿ ಟ್ರಾಫಿಕ್ ನಿಯಂತ್ರಣವನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ಪೋಲೀಸ್ ಸಿಬ್ಬಂದಿಯನ್ನು ನಿಯೋಜಿಸುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

15. **ಶ್ರೀ ಗುರು ಪಾಟೀಲ್ ಶಿರವಾಳ್** ಅವರು - ಶಹಪುರ ಮತಕ್ಷೇತ್ರದ ಸುರಪುರ ತಾಲ್ಲೂಕು, ಎವೂರ ಗ್ರಾಮದಲ್ಲಿ ಅರಣ್ಯ ಹಕ್ಕು ಸಂರಕ್ಷಣೆ ಸಮಿತಿಯ ಕೆಲಸಗಳನ್ನು ತೀವ್ರಗತಿಯಲ್ಲಿ ನಿರ್ವಹಿಸುವ ಬಗ್ಗೆ ಮಾನ್ಯ ಅರಣ್ಯ ಸಚಿವರ ಗಮನ ಸೆಳೆಯುವುದು.

**ಎಸ್. ಮೂರ್ತಿ**
ಕಾರ್ಯದರ್ಶಿ(I/c)

---

**ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.**
(http://kla.kar.nic.in/assembly/lob/lob.htm)